## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಮಾನ್ಯ ಸದಸ್ಯರ ಹೆಸರು | : | ಶ್ರೀ ಅರವಿಂದ ಕುಮಾರ್ ಅರಳಿ |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1084** |
| ಉತ್ತರಿಸಬೇಕಾದ ದಿನಾಂಕ | : | 22.12.2021 |
| ಉತ್ತರಿಸಬೇಕಾದ ಸಚಿವರು | : | ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ಸಚಿವರು |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಬೀದರ್ ಜಿಲ್ಲೆಯಲ್ಲಿ ಅಲೆಮಾರಿ/ಅರೆ ಅಲೆಮಾರಿ ಜನಾಂಗದ ಜನರಿಗೆ ಎಷ್ಟು ವಸತಿಗಳನ್ನು ನಿರ್ಮಾಣ ಮಾಡಿಕೊಡಲಾಗಿದೆ ಮತ್ತು ಇನ್ನೂ ಎಷ್ಟು ಜನರಿಗೆ ವಸತಿ ನೀಡಬೇಕಾಗಿದೆ;</td><td rowspan="2">ಅಲೆಮಾರಿ ಹಾಗೂ ಅರೆ ಅಲೆಮಾರಿ ಜನಾಂಗಕ್ಕೆ ದೇವರಾಜ ಅರಸು ವಸತಿ ಯೋಜನೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತಿದೆ. ಸದರಿ ಯೋಜನೆಗಳಡಿಯಲ್ಲಿ ಅಲೆಮಾರಿ/ಅರೆ ಅಲೆಮಾರಿ ವರ್ಗದ ವಸತಿ ರಹಿತರಿಗೆ 2012-13ನೇ ಸಾಲಿನಿಂದ 2020-21ನೇ ಸಾಲಿನವರೆಗೆ ನೀಡಲಾದ ಮನೆಗಳ ವಿವರ ಕೆಳಕಂಡಂತಿದೆ.
<table>
<tr><th>ಯೋಜನೆ</th><th>ಅನುಮೋದನೆ ಗೊಂಡ ಮನೆಗಳು</th><th>ಪೂರ್ಣ ಗೊಂಡ ಮನೆಗಳು</th><th>ಪ್ರಗತಿಯಲ್ಲಿ ರುವ ಮನೆಗಳು</th><th>ಪ್ರಾರಂಭ ವಾಗಬೇಕಿ ರುವ ಮನೆಗಳು</th><th>ಬ್ಲಾಕ್ ಆದ ಮನೆಗಳು</th></tr>
<tr><td>ದೇವರಾಜ ಅರಸು ವಸತಿ ಯೋಜನೆ</td><td>593</td><td>428</td><td>65</td><td>37</td><td>63</td></tr>
<tr><td>ಒಟ್ಟು</td><td>593</td><td>428</td><td>65</td><td>37</td><td>63</td></tr>
</table>
ಬೀದರ್ ಜಿಲ್ಲೆಯಲ್ಲಿ ಅಲೆಮಾರಿ ಅರೆ ಅಲೆಮಾರಿ ವರ್ಗದವರನ್ನು ಒಳಗೊಂಡಂತೆ ಒಟ್ಟು ವಸತಿ/ನಿವೇಶನ ರಹಿತರು 140508 ಇರುವುದು ಕಂಡು ಬಂದಿರುತ್ತದೆ. ಸದರಿ ವರ್ಗದ ವಸತಿ ರಹಿತರಿಗೆ ಜಿಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದ್ದು, ಈ ಸಮಿತಿಯ ಮೂಲಕ ಅರ್ಹ ಫಲಾನುಭವಿಗಳನ್ನು ಆಯ್ಕೆಮಾಡಿ ಸರ್ಕಾರದಿಂದ ಒದಗಿಸಲಾದ ಅನುದಾನಕ್ಕೆ ಅನುಗುಣವಾಗಿ ಹಂತ ಹಂತವಾಗಿ ಎಲ್ಲಾ ಅರ್ಹ ಅಲೆಮಾರಿ/ ಅರೆ ಅಲೆಮಾರಿ ವರ್ಗದವರಿಗೆ ವಸತಿ ಸೌಕರ್ಯ ಕಲ್ಪಿಸಲಾಗುವುದು.<br><br>
ಬೀದರ್ ಜಿಲ್ಲೆಯ ಬಸವಕಲ್ಯಾಣ ವಿಧಾನಸಭಾ ಕ್ಷೇತ್ರಕ್ಕೆ 2020-21 ನೇ ಸಾಲಿನಲ್ಲಿ ದೇವರಾಜ ಅರಸು ವಸತಿ ಯೋಜನೆಯಡಿ ಅಲೆಮಾರಿ /ಅರೆ ಅಲೆಮಾರಿ ಜನಾಂಗಕ್ಕೆ 2500 ಮನೆಗಳ ಗುರಿಯನ್ನು ಮಂಜೂರು ಮಾಡಲಾಗಿದ್ದು, ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಫಲಾನುಭವಿಗಳ ಆಯ್ಕೆ</td></tr>
<tr><td>(ಆ)</td><td>ನೀಡಿದ್ದಲ್ಲಿ, ವಸತಿ ಹಂಚಿಕೆಯಲ್ಲಿ ಯಾವ ಪ್ರಕ್ರಿಯೆ ಕೈಗೊಳ್ಳಲಾಗಿದೆ; ಫಲಾನುಭವಿಗಳ ಆಯ್ಕೆ ಮಾಡುವ ಅಧಿಕಾರ ಯಾರಿಗಿದೆ; ಅದಕ್ಕಾಗಿ ಸಮಿತಿ ಇದೆಯೇ; ಹಾಗಿದ್ದಲ್ಲಿ ವಿವರ ನೀಡುವುದು;</td></tr>
</table>

| | | |
|---|---|---|
| | | ಮಾಡಿ ಸಭಾ ನಡವಳಿಯೊಂದಿಗೆ ರಾಜೀವ್ ಗಾಂಧಿ ವಸತಿ ನಿಗಮ ನಿಯಮಿತಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| (ಇ) | ಈ ಜನಾಂಗಕ್ಕೆ ಪ್ರತ್ಯೇಕ ಓಣಿ ನಿರ್ಮಾಣ ಮಾಡಲಾಗಿದೆಯೇ; ಅಥವಾ ಮಾಡುವ ಯೋಚನೆ ಏನಾದರು ಸರ್ಕಾರದ ಮುಂದಿದೆಯೇ; | ಸದರಿ ವಸತಿ ಯೋಜನೆಯಡಿ ನೀಡಲಾಗುವ ಮನೆಗಳು ಫಲಾನುಭವಿಗಳೇ ಸ್ವಂತ ಮನೆ ನಿರ್ಮಾಣ ಮಾಡಿಕೊಳ್ಳಲು ಮೊದಲ ಆದ್ಯತೆ ನೀಡಲಾಗಿದ್ದು, ಈ ವರ್ಗದ ವಸತಿ ರಹಿತರಿಗೆ ಪ್ರತ್ಯೇಕವಾಗಿ ಈವರೆಗೆ ಯಾವುದೇ ಓಣಿ ನಿರ್ಮಾಣ ಮಾಡುವ ಯೋಜನೆ ಪ್ರಸ್ತುತ ಸರ್ಕಾರದ ಮುಂದಿರುವುದಿಲ್ಲ. |
| (ಈ) | ಈ ಜನಾಂಗದ ಸರ್ವೆ ಕಾರ್ಯವನ್ನು ಕೈಗೊಳ್ಳಲಾಗಿದೆಯೇ; ಕೈಗೊಂಡಿದ್ದಲ್ಲಿ, ಸರ್ವೆ ಮಾಹಿತಿ ಹಾಗೂ ವರದಿಯೊಂದಿಗೆ ವಿವರ ನೀಡುವುದು ? | 2018 ರಲ್ಲಿ ಸ್ಥಳೀಯ ಸಂಸ್ಥೆಗಳ ಮೂಲಕ ಅಲೆಮಾರಿ/ಅರೆ ಅಲೆಮಾರಿ ವರ್ಗದವರು ಸೇರಿದಂತೆ ವಸತಿ ರಹಿತರ ಹಾಗೂ ನಿವೇಶನ ರಹಿತರ ಸಮೀಕ್ಷೆ ಮಾಡಲಾಗಿದ್ದು, ಬೀದರ್ ಜಿಲ್ಲೆಯಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶಕ್ಕೆ ಸೇರಿ ಒಟ್ಟು 140508 ವಸತಿ ರಹಿತರಿರುವುದು ಕಂಡು ಬಂದಿರುತ್ತದೆ. |

ಸಂಖ್ಯೆ :ವಇ 477 ಹೆಚ್ಎಂ 2021

(ವಿ. ಸೋಮಣ್ಣ)

ವಸತಿ ಮತ್ತು ಮೂಲಸೌಲಭ್ಯ

ಅಭಿವೃದ್ಧಿ ಸಚಿವರು